# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1221
ಸದಸ್ಯರ ಹೆಸರು : ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ : 23.12.2021.
ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 5 ವರ್ಷಗಳಿಂದ ಬೆಂಗಳೂರು ನಗರದಲ್ಲಿ ಸಂಚಾರಿ ಆರಕ್ಷಕರು (Traffic Police) ರಸ್ತೆ ಸಂಚಾರ ಉಲ್ಲಂಘನೆ ಪ್ರಕರಣಗಳಲ್ಲಿ ಸಾರ್ವಜನಿಕರಿಂದ ವಸೂಲಾದ ದಂಡದ ಮೊತ್ತವೆಷ್ಟು ; (ವರ್ಷಾವಾರು ವಿವರ ನೀಡುವುದು) | ಸಂಚಾರ ಉಲ್ಲಂಘನೆ ಪ್ರಕರಣಗಳಲ್ಲಿ ಕಳೆದ 5 ವರ್ಷಗಳಲ್ಲಿ ಸಂಗ್ರಹಿಸಿದ ದಂಡ ಮೊತ್ತದ ವಿವರಗಳನ್ನು ಈ ಕೆಳಕಂಡಂತೆ ನೀಡಲಾಗಿದೆ. |

| ವರ್ಷ | ದಾಖಲಿಸಿದ ಪ್ರಕರಣಗಳ ಸಂಖ್ಯೆ | ಸಂಗ್ರಹಿಸದ ದಂಡ ಮೊತ್ತ (ರೂ.ಗಳಲ್ಲಿ) |
|---|---|---|
| 2016 | 91,80,438 | 66,97,61,526 |
| 2017 | 1,01,93,274 | 1,12,38,52,997 |
| 2018 | 83,89,647 | 81,25,73,050 |
| 2019 | 79,87,919 | 89,18,84,635 |
| 2020 | 84,06,182 | 99,57,33,010 |
| 2021 (ನವೆಂಬರ್ ಮಾಹೆಯ ಅಂತ್ಯಕ್ಕೆ) | 86,13,385 | 1,23,96,73,525 |
| ಒಟ್ಟು | **5,27,70,845** | **5,73,34,78,743** |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಸಂಚಾರಿ ಆರಕ್ಷಕರು ಸಂಚಾರ ಉಲ್ಲಂಘನೆ ಪ್ರಕರಣಗಳನ್ನು ದಾಖಲಿಸಲು ಯಾವುದಾದರೂ ಗುರಿ ನೀಡಲಾಗಿದೆಯೇ ; (ವಿವರ ನೀಡುವುದು) | ➢ ಸಂಚಾರ ಉಲ್ಲಂಘನಾ ಪ್ರಕರಣಗಳನ್ನು ದಾಖಲಿಸಲು ಸಂಚಾರ ಪೊಲೀಸರಿಗೆ ಯಾವುದೇ ನಿರ್ದಿಷ್ಟ ಗುರಿಯನ್ನು ನೀಡಲಾಗಿರುವುದಿಲ್ಲ.<br>➢ ಸಂಚಾರ ನಿಯಮ ಪಾಲನೆಯು ಪ್ರತಿಯೊಬ್ಬ ನಾಗರೀಕರ ಆದ್ಯ ಕರ್ತವ್ಯವಾಗಿದ್ದು, ನಿಯಮಗಳ ಪಾಲನೆಯನ್ನು ಪರಿಣಾಮಕಾರಿಯಾಗಿ ಜಾರಿ ಮಾಡುವ ನಿಟ್ಟಿನಲ್ಲಿ ಹಾಗೂ ಸಂಭವಿಸುತ್ತಿರುವ ಮಾರಣಾಂತಿಕ ಅಪಘಾತಗಳನ್ನು ತಡೆಯುವ ನಿಟ್ಟಿನಲ್ಲಿ ಸಂದರ್ಭಾನುಸಾರ ವಿಶೇಷ ಕಾರ್ಯಾಚರಣೆಯನ್ನು ಹಾಗೂ ವಿಶೇಷ ಅಭಿಯಾನಗಳನ್ನು ಕೈಗೊಳ್ಳಲಾಗಿರುತ್ತದೆ. |
| ಇ) | ಹಲವು ಸಂಚಾರಿ ಉಲ್ಲಂಘನೆ ಪ್ರಕರಣಗಳಲ್ಲಿ ಸಂಚಾರಿ ಆರಕ್ಷಕರು, ಸಾರ್ವಜನಿಕರಿಗೆ ತೊಂದರೆ | ➢ ಸಂಚಾರ ಉಲ್ಲಂಘನಾ ಪ್ರಕರಣಗಳಲ್ಲಿ ಸಂಚಾರಿ ಪೊಲೀಸರು, ಸಾರ್ವಜನಿಕರಿಗೆ ತೊಂದರೆ ನೀಡಿರುವುದರ ಬಗ್ಗೆ ಯಾವುದೇ ದೂರುಗಳು ದಾಖಲಾಗಿರುವುದಿಲ್ಲ. |

| | | |
|---|---|---|
| | ಮಾಡಿರುವುದರ ಕುರಿತು ಯಾವುದಾದರೂ ದೂರುಗಳು ಸರ್ಕಾರದ ಬಳಿ ದಾಖಲೆಯಾಗಿದೆಯೇ ; ಸಾರ್ವಜನಿಕರು ತಮ್ಮ ಅಳಲು ತೋಡಿಕೊಳ್ಳಲು ಸರ್ಕಾರದಿಂದ ಸೂಕ್ತ ವ್ಯವಸ್ಥೆ ಮಾಡಲಾಗಿದೆಯೇ ; (ವಿವರ ನೀಡುವುದು) | ➢ ಸಾರ್ವಜನಿಕರು ಈ ಕುರಿತಂತೆ ಠಾಣೆಯಲ್ಲಿ ಅಳವಡಿಸಿರುವ ದೂರು ಪೆಟ್ಟಿಗೆಯಲ್ಲಿ ಹಾಗೂ ಪೊಲೀಸ್ ಇಲಾಖೆಯ ಸಾರ್ವಜನಿಕ ಕುಂದು ಕೊರತೆ ವಿಭಾಗದಲ್ಲಿ, ಇ-ಮೇಲ್ ಮುಖಾಂತರ ಹಾಗೂ ಇಲಾಖೆಯ ಅಧಿಕೃತ ಸಾಮಾಜಿಕ ಜಾಲತಾಣದ ಖಾತೆಗಳಲ್ಲಿ ದೂರುಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗಿರುತ್ತದೆ.<br>➢ ಸಂಚಾರಿ ಪೊಲೀಸರ ವಿರುದ್ದ ದೂರುಗಳು ಬಂದಲ್ಲಿ ನಿಯಮನಾನುಸಾರ ಕ್ರಮ ಕೈಗೊಳ್ಳಲಾಗುವುದು.<br>**ಬೆಂಗಳೂರು ನಗರ ಸಂಚಾರ ವಿಭಾಗದಲ್ಲಿ ಪಾರದರ್ಶಕತೆ ತರಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.**<br>➢ ಪಿ.ಡಿ.ಎ. ಉಪಕರಣಗಳನ್ನು ಎ.ಎಸ್.ಐ. ಪಿ.ಎಸ್.ಐ ಮತ್ತು ಪಿ.ಐ ಹಂತದವರೆಗಿನ ಅಧಿಕಾರಿಗಳಿಗೆ ಹಂಚಿಕೆ ಮಾಡಲಾಗಿದ್ದು, ಇದರ ಮೂಲಕ ಸಂಚಾರ ನಿಯಮಗಳನ್ನು ಉಲ್ಲಂಘಿಸುವ ಚಾಲಕರುಗಳ ವಿರುದ್ಧ ಸ್ಥಳದಲ್ಲೇ ಸಂಚಾರ ಪೊಲೀಸ್ ಅಧಿಕಾರಿಗಳು ಪ್ರಕರಣಗಳನ್ನು ದಾಖಲಿಸಿ ಸ್ಥಳ ದಂಡವನ್ನು ಪಾವತಿಸಿಕೊಳ್ಳುವ ವ್ಯವಸ್ಥೆ ಕಲ್ಪಿಸಲಾಗಿದೆ.<br>➢ ಸಂಚಾರ ನಿಯಮಗಳನ್ನು ಉಲ್ಲಂಘಿಸುವವರ ವಿರುದ್ಧ ಕ್ರಮ ಕೈಗೊಳ್ಳಲು ಅನುವಾಗುವಂತೆ ನಗರದ ಪ್ರಮುಖ ಸ್ಥಳಗಳಲ್ಲಿ ಕಣ್ಗಾವಲು ಅಳವಡಿಸಲಾಗಿದ್ದು, ಅವುಗಳ ಸಹಾಯದಿಂದ ವಾಹನಗಳ ಛಾಯಾಚಿತ್ರವನ್ನು ಸೆರೆಹಿಡಿದು ಕ್ರಮ ಕೈಗೊಳ್ಳಲಾಗುತ್ತಿದೆ.<br>➢ ಜಂಕ್ಷನ್‌ಗಳಲ್ಲಿ ಕರ್ತವ್ಯ ನಿರ್ವಹಿಸುವ ಸಂಚಾರ ಪೊಲೀಸರಿಗೆ ಡಿಜಿಟಲ್ ಎಫ್.ಟಿ.ವಿ.ಆರ್. ಗಳನ್ನು ವಿತರಿಸಿ ಅವುಗಳ ಸಹಾಯದಿಂದ ಸಂಚಾರ ನಿಯಮ ಉಲ್ಲಂಘನೆ ಎಸಗುವ ವಾಹನಗಳ ಛಾಯಾಚಿತ್ರಗಳನ್ನು ಸೆರೆಹಿಡಿದು ಪ್ರಕರಣಗಳನ್ನು ದಾಖಲಸಿಕೊಳ್ಳಲಾಗುತ್ತಿದೆ.<br>➢ ಸಾಮಾಜಿಕ ತಾಣವಾದ ಫೇಸ್‌ಬುಕ್ ಮುಖಾಂತರ ಸಾರ್ವಜನಿಕರು ಸಂಚಾರ ಪೊಲೀಸರ ಛಾಯಾಚಿತ್ರವನ್ನು ಸೆರೆಹಿಡಿದು ದೂರು ದಾಖಲಿಸಿದಲ್ಲಿ ಅಂತಹ ಸಿಬ್ಬಂದಿಗಳ ವಿರುದ್ದ ವಿಚಾರಣೆ ನಡೆಸಿ ಕ್ರಮ ಕೈಗೊಳ್ಳಲಾಗುವುದು.<br>➢ ಸಾಮಾಜಿಕ ತಾಣವಾದ ಟ್ವಿಟರ್ ಮುಖಾಂತರ ಸಾರ್ವಜನಿಕರು ಸಂಚಾರ ಪೊಲೀಸರ ಛಾಯಾಚಿತ್ರವನ್ನು ಸೆರೆಹಿಡಿದು ದೂರು ದಾಖಲಿಸಿದಲ್ಲಿ ಅಂತಹ ಸಿಬ್ಬಂದಿಗಳ ವಿರುದ್ದ ವಿಚಾರಣೆ ನಡೆಸಿ ಕ್ರಮ ಕೈಗೊಳ್ಳಲಾಗುವುದು.<br>➢ ಎಸ್.ಎಂ.ಎಸ್. ಮೂಲಕವು ಸಹ ಸಾರ್ವಜನಿಕರು ಸಂಚಾರ ಪೊಲೀಸರ ವಿರುದ್ದ ದೂರು ದಾಖಲಿಸಬಹುದು.<br>➢ ಪಬ್ಲಿಕ್-ಐ ಮೂಲಕವು ಸಹ ಸಾರ್ವಜನಿಕರು ಸಂಚಾರ ಪೊಲೀಸರ ಛಾಯಾಚಿತ್ರವನ್ನು ಸೆರೆಹಿಡಿದು ದೂರು ದಾಖಲಿಸಿದಲ್ಲಿ ಅಂತಹ ಸಿಬ್ಬಂದಿಗಳ ವಿರುದ್ದ ವಿಚಾರಣೆ ನಡೆಸಿ ಕ್ರಮ ಕೈಗೊಳ್ಳಲಾಗುವುದು.<br>➢ ಇ-ಮೇಲ್ ಮೂಲಕವು ಸಹ ಸಾರ್ವಜನಿಕರು ಸಂಚಾರ ಪೊಲೀಸರ ವಿರುದ್ದ ದೂರು ದಾಖಲಿಸಿದಲ್ಲಿ ಅಂತಹ ಸಿಬ್ಬಂದಿಗಳ ವಿರುದ್ದ ವಿಚಾರಣೆ |

| | | |
|---|---|---|
| | | ನಡೆಸಿ ಕ್ರಮ ಕೈಗೊಳ್ಳಲಾಗುವುದು.<br>➢ ಬೆಂಗಳೂರು ನಗರ ವ್ಯಾಪ್ತಿಯಲ್ಲಿ ವಾಹನಗಳ ತಪಾಸಣೆಯ ಹೆಸರಿನಲ್ಲಿ ವಾಹನ ಚಾಲಕ/ಸವಾರರುಗಳಿಗೆ ಕಿರುಕುಳ ನೀಡದಿರುವ ಬಗ್ಗೆ ಸಿಬ್ಬಂದಿಗಳಿಗೆ ನಿರಂತರವಾಗಿ ತಿಳುವಳಿಕೆ ನೀಡುತ್ತಾ ಅಂತಹ ಯಾವುದೇ ಸಾರ್ವಜನಿಕ ದೂರುಗಳು ಬಂದಲ್ಲಿ ನಿರ್ದಾಕ್ಷಿಣ್ಯವಾಗಿ ಸೂಕ್ತ ಶಿಸ್ತಿನ ಕ್ರಮ ತೆಗೆದುಕೊಳ್ಳಲಾಗುತ್ತಿದೆ. ಈ ಬಗ್ಗೆ ಕಾಲಕಾಲಕ್ಕೆ ಜ್ಞಾಪನ, ಸುತ್ತೋಲೆಗಳು ಹಾಗೂ ಸಭೆಯಲ್ಲಿನ ನಡವಳಿಗಳ ಮುಖೇನ ಸೂಕ್ತ ನಿರ್ದೇಶನಗಳನ್ನು ನೀಡಲಾಗುತ್ತಿದೆ.<br>➢ ಸಂಚಾರ ಪೊಲೀಸರು ಸಾರ್ವಜನಿಕರಲ್ಲಿ ಅಸಭ್ಯವಾಗಿ ವರ್ತಿಸಿದಲ್ಲಿ ಅಥವಾ ಭ್ರಷ್ಟಾಚಾರದಲ್ಲಿ ತೊಡಗಿದಲ್ಲಿ ಸಾರ್ವಜನಿಕರು ಡಿ.ಸಿ.ಪಿ., ಎ.ಸಿ.ಪಿ., ಮತ್ತು ಪಿ.ಐ. ರವರುಗಳಿಗೂ ಸಹ ದೂರು ನೀಡಬಹುದಾಗಿದೆ. ಅಂತಹ ಸಿಬ್ಬಂದಿಗಳ ವಿರುದ್ಧ ವಿಚಾರಣೆ ನಡೆಸಿ ಆಪಾದನೆ ಸಾಬೀತಾದಲ್ಲಿ ಸೂಕ್ತ ಶಿಸ್ತಿನ ಕ್ರಮ ಜರುಗಿಸಲಾಗುವುದು. |
| ಈ) | ಹಲವು ಸಂಚಾರಿ ಉಲ್ಲಂಘನೆ ಪ್ರಕರಣಗಳಲ್ಲಿ ಸಂಚಾರಿ ಆರಕ್ಷಕರು ಸಾರ್ವಜನಿಕರಿಗೆ ತಮ್ಮ ತಪ್ಪು ತಿದ್ದಿಕೊಳ್ಳಲು ಅವಕಾಶ ನೀಡದೇ (ಉದಾ: ಕಾರಣಾಂತರಗಳಿಂದ ರಸ್ತೆ ಬದಿ ಅಲ್ಪ ಸಮಯದ ವಾಹನ ನಿಲುಗಡೆ) ವಾಹನದ ಛಾಯಚಿತ್ರಗಳನ್ನು ತೆಗೆದ ಸಂಚಾರಿ ಉಲ್ಲಂಘನೆ ಪ್ರಕರಣ ದಾಖಲಿಸುತ್ತಿರುವ ಕುರಿತು ಸರ್ಕಾರದ ನಿಲುವೇನು ? (ಸ್ಪಷ್ಟ ಪಡಿಸುವುದು) | ➢ ರಸ್ತೆಯ ಮೇಲೆ ರಸ್ತೆ ಬಳಕೆದಾರರು ಸುರಕ್ಷತೆಯಿಂದ ಚಾಲನೆ ಮಾಡುವಂತೆ ನೋಡಿಕೊಳ್ಳುವುದು ಹಾಗೂ ಅಪಘಾತಗಳನ್ನು ತಡೆಯುವುದು ಸಂಚಾರ ಪೊಲೀಸರ ಪ್ರಮುಖ ಜವಾಬ್ದಾರಿಯಾಗಿದ್ದು, ಈ ನಿಟ್ಟಿನಲ್ಲಿ ನಿಯಮ ಜಾರಿಯನ್ನು ಪರಿಣಾಮಕಾರಿಯಾಗಿ ಜಾರಿ ಮಾಡಲಾಗುತ್ತಿದೆ. ಸಂಚಾರ ನಿಯಮಗಳನ್ನು ಉಲ್ಲಂಘಿಸಿದವರ ವಿರುದ್ಧ ದಂಡ ವಿಧಿಸುವ ಪ್ರಕ್ರಿಯೆ ಅತ್ಯಂತ ಮಹತ್ವದಾಗಿದೆ. ನಿಯಮ ಉಲ್ಲಂಘಿಸಿದವರ ವಿರುದ್ಧ ಕ್ರಮ ಕೈಗೊಳ್ಳದಿದ್ದರೆ ವಾಹನ ಸವಾರರು ರಸ್ತೆಯ ಮೇಲೆ ಸಂಚಾರ ನಿಯಮಗಳನ್ನು ಉಲ್ಲಂಘಿಸುವುದರಿಂದ ಹೆಚ್ಚಿನ ಅಪಘಾತಗಳು ಸಂಭವಿಸುವ ಸಾಧ್ಯತೆ ಇರುತ್ತವೆ.<br>➢ ವಾಹನಗಳ ಛಾಯಾ ಚಿತ್ರಗಳನ್ನು ತೆಗೆದು ಸಂಚಾರ ಉಲ್ಲಂಘನಾ ಪ್ರಕರಣಗಳನ್ನು ದಾಖಲು ಮಾಡುವ ಪ್ರಕ್ರಿಯೆಯು ಸಂಪರ್ಕ ರಹಿತ ನಿಯಮ ಜಾರಿಯಲ್ಲಿ ಕೈಗೊಳ್ಳಲಾಗುತ್ತಿರುವ ಒಂದು ನಿಯಮ ಜಾರಿ ವಿಧಾನವಾಗಿದ್ದು, ಈ ಪ್ರಕ್ರಿಯೆಯಲ್ಲಿ ಸಾರ್ವಜನಿಕರ ನಡುವಿನ ಸಂಘರ್ಷವನ್ನು ತಪ್ಪಿಸುವ ಮತ್ತು ಸಂಚಾರ ನಿಯಮ ಉಲ್ಲಂಘನೆ ಪ್ರಕರಣಗಳ ದಾಖಲು ಮಾಡುವಿಕೆಯಲ್ಲಿ ಪಾರದರ್ಶಕತೆ ತರುವ ಉದ್ದೇಶದಿಂದ ವಾಹನಗಳನ್ನು ಭೌತಿಕವಾಗಿ ತಡೆಯದೆ ನಿಯಮ ಉಲ್ಲಂಘನಾ ಪ್ರಕರಣಗಳನ್ನು ದಾಖಲಿಸಿ ಕ್ರಮ ಕೈಗೊಳ್ಳುವ ಉಪಕ್ರಮವನ್ನು ಸಂಚಾರ ವಿಭಾಗದಿಂದ ಕೈಗೊಂಡಿರುತ್ತದೆ.<br>➢ ಪದೇ ಪದೇ ಸಂಚಾರ ನಿಯಮ ಉಲ್ಲಂಘಿಸುವ ಉಲ್ಲಂಘನೆದಾರರಿಗೆ ಸಂಚಾರ ತರಬೇತಿ ಮತ್ತು ರಸ್ತೆ ಸುರಕ್ಷತಾ ಸಂಸ್ಥೆಯಲ್ಲಿ ಸಂಚಾರ ನಿಯಮಗಳ ಬಗ್ಗೆ ಅರಿವು ಮೂಡಿಸುವುದರ ಜೊತೆಗೆ ರಸ್ತೆ ಸುರಕ್ಷತೆ ಬಗ್ಗೆ ತರಬೇತಿಯನ್ನು ನೀಡಲಾಗುತ್ತಿದೆ. |

ಹೆಚ್‌ಡಿ 471 ಎಸ್‌ಎಸ್‌ಟಿ 2021

(ಆರಗ ಜ್ಞಾನೇಂದ್ರ)
ಗೃಹ ಸಚಿವರು